ಡಾ॥ ಎನ್. ಎಸ್. ರಂಗರಾಜು

# ತುಮಕೂರು ಜಿಲ್ಲೆಯ ಹೊಯ್ಸಳ ದೇವಸ್ಥಾನಗಳು : ಒಂದು ಸಮೀಕ್ಷೆ

'ತುಮಕೂರು' ಎಂಬ ಪದವು ಇಲ್ಲಿಯ ಪದ್ಧತಿಯ ಪ್ರಕಾರ 'ತುಮುಕೆ' ಅನ್ನುವ ಪದದ ಮೂಲದಿಂದ ಬಂದಿರಬಹುದೆಂಬ ಅಭಿಪ್ರಾಯವಿದೆ. 'ತುಮುಕೆ' (Tumuke) ಎಂದರೆ ಒಂದು ಸಣ್ಣ ನಗಾರಿಯಾಗಿದ್ದು, ಅದನ್ನು ಜನರಿಗೆ ವಿಷಯ ಮುಟ್ಟಿಸಲು ಬಾರಿಸುತ್ತಿದ್ದರು. ಆದರೆ ೨೦ನೇ ಶತಮಾನದ ಶಾಸನದ ಆಧಾರದ ಮೇಲೆ ಹೇಳುವುದಾದರೆ, 'ತುಮ್ಮೆಗೂರು' (Tummeguru) ಅಂದರೆ ಈ ಜಿಲ್ಲೆಯಲ್ಲಿ ಹೆಚ್ಚಾಗಿ ಕಂಡುಬರುವ ಸುವಾಸನೆಯುಳ್ಳ ತುಂಬೆ ಹೂವಿನಿಂದ (Leucas Aspera) ಈ ಹೆಸರು ಬಂದಿರಬಹುದೆಂದು ಹೇಳಲಾಗಿದೆ. ಕೆಲಕಾಲಾನಂತರ 'ತುಮ್ಮೆವೂರು' (Tummeuru) ಬದಲಾವಣೆ ಹೊಂದಿ ಈಗಿನ ತುಮಕೂರು ಆಗಿರಬಹುದು.

ತುಮಕೂರು ಜಿಲ್ಲೆಯು ಶಿಲಾಯುಗದ ಸಂಸ್ಕೃತಿಯಿಂದಲೂ ಬಹಳ ಮುಖ್ಯವಾದ ಸ್ಥಳವಾಗಿದೆ. ಪ್ರೊ॥ ಸಂಪತ್‌ಅಯ್ಯಂಗಾರ್, ಎಲ್. ರಾಮರಾವ್ ಹಾಗೂ ಎಂ. ಶೇಷಾದ್ರಿಯವರಿಂದ ತಿಪಟೂರು ತಾಲ್ಲೂಕಿನ ಕಿಬ್ಬನಹಳ್ಳಿಯ ಶಿಲಾಯುಗದ ಸಂಸ್ಕೃತಿಯ ಬಗ್ಗೆ ಹೆಚ್ಚಿನ ಮಾಹಿತಿ ಒದಗುತ್ತದೆ. ಈ ಜಿಲ್ಲೆಯಲ್ಲಿ ಭಿನ್ನಸ್ತರ ಶಿಲೆಯು ಹೇರಳವಾಗಿ ಕಂಡುಬರುತ್ತದೆ. ಇದು ಚಿಕ್ಕನಾಯಕನಹಳ್ಳಿ, ಕುಣಿಗಲ್ಲು ಮತ್ತು ಹುಲಿಯೂರು ದುರ್ಗಗಳಲ್ಲಿ ವಿಪುಲವಾಗಿದೆ. ಇದು ದೇವಸ್ಥಾನಗಳನ್ನು ಕಟ್ಟುವುದಕ್ಕೆ ಬಹಳ ಉಪಯೋಗಕಾರಿಯಾಗಿದ್ದು, ಹೊಯ್ಸಳರು ಇದನ್ನು ತಮ್ಮ ದೇವಸ್ಥಾನಗಳ ನಿರ್ಮಾಣದಲ್ಲಿ ಬಳಸಿಕೊಂಡಿರಬಹುದು.

ಇತಿಹಾಸಕಾಲದಲ್ಲಿ ಇದು ತಲಕಾಡು ಗಂಗರ ಕಾಲದಿಂದಲೂ ಮುಖ್ಯವಾದ ಸ್ಥಳ. ಕ್ರಿ.ಶ. ೪೦೦ರಲ್ಲಿ ಕಂಡುಬರುವ ಮೊದಲ ಶಾಸನವೆಂದರೆ ಮಾಧವನ (ಕ್ರಿ.ಶ. ೪೨೦-೪೬೬) ತಾಮ್ರಶಾಸನ. ಇದು ಕ್ರಿ.ಶ. ೪೫೦ಕ್ಕೆ ಸೇರಿದ್ದು, ಬೌದ್ಧಮತಕ್ಕೆ ಭೂಮಿಯನ್ನು ಕೊಡುಗೆಯಾಗಿ ಕೊಟ್ಟದ್ದನ್ನು ತಿಳಿಸುತ್ತದೆ. ಮತ್ತೊಂದು ಶಾಸನವು ಶ್ರೀಪುರುಷನದಾಗಿದ್ದು (ಕ್ರಿ.ಶ. ೭೨೦–೭೮೮), ಅದು ಗಂಗರು ರಾಷ್ಟ್ರಕೂಟರೊಡನೆ ಮಾಡಿದ ಯುದ್ಧದ ಬಗ್ಗೆ ತಿಳಿಸುತ್ತದೆ. ಈ ಶಾಸನವು ಕ್ರಿ.ಶ.ಸು. ೭೫೦ರಲ್ಲಿ ಬರೆದದ್ದಾಗಿದೆ. ಹಾಗೆಯೇ, ಗಂಗರ ಕಾಲದ ಕೊನೆಯ ಶಾಸನವಾಗಿ ಸತ್ಯವಾಕ್ಯನ (ಕ್ರಿ.ಶ. ೯೬೩–೯೭೪) ಕ್ರಿ. ಶ. ೯೭೨ರ ಶಾಸನವು ಕಂಡುಬರುತ್ತದೆ. ಇವನು ನೊಳಂಬರನ್ನು ಸೋಲಿಸಿದವನು. ಇವನನ್ನು ೩ನೇ ಮಾರಸಿಂಹನೆಂತಲೂ ಕರೆಯಲಾಗಿದೆ. ಅನಂತರದ ಬಾದಾಮಿ ಚಾಲುಕ್ಯರ ಯಾವ ಶಾಸನವೂ ಕಂಡುಬರುವುದಿಲ್ಲ. ಆದರೆ ರಾಷ್ಟ್ರಕೂಟರರಿಗೆ ಸೇರಿದ ಶಾಸನಗಳನ್ನು ಕಾಣಬಹುದು. ಇದರಲ್ಲಿ ಅತಿ ಮುಖ್ಯವಾದುದು ೧ನೇ ಕೃಷ್ಣನಿಗೆ (ಕ್ರಿ.ಶ. ೭೫೬–೭೭೫) ಸಂಬಂಧಿಸಿದ ಕಡಬಾದಲ್ಲಿ ದೊರೆತಿರುವ ತಾಮ್ರಶಾಸನ ಈ ಕಾಲದಲ್ಲಿ ವಿಮಲಾದಿತ್ಯನು ಕುಣಿಗಲ್ಲಿನ ರಾಜ್ಯಪಾಲನಾಗಿದ್ದುದು ಕಂಡುಬರುತ್ತದೆ. ಕ್ರಿ.ಶ. ೯೮೨ರಲ್ಲಿ ಬರೆಸಲಾದ ಹೇಮಾವತಿ ಶಾಸನವು ಮತ್ತೊಂದು ಮುಖ್ಯವಾದ ಶಾಸನ. ಇದು ೯೮೨ ಮಾರ್ಚ್ ೨೦ರಂದು ಇಂದ್ರರಾಜನು ಶ್ರವಣಬೆಳಗೊಳದಲ್ಲಿ ಕೈಗೊಂಡ ಸಲ್ಲೇಖನವ್ರತದ ಬಗ್ಗೆ ತಿಳಿಸುತ್ತದೆ. ಹಾಗೆಯೇ, ನೊಳಂಬರ ಬಗ್ಗೆಯೂ ಇದರಿಂದ ಬಹಳಷ್ಟು ಮಾಹಿತಿಯು ಒದಗುತ್ತದೆ. ನೊಳಂಬರು

ಅತೀ ಪ್ರಬಲವಾದ ಹಿಡಿತವನ್ನು ಈ ಜಿಲ್ಲೆಯ ಮೇಲೆ ಹೊಂದಿದ್ದರು. ಕ್ರಿ. ಶ. ೯೪೯ರಿಂದ ಕ್ರಿ. ಶ. ೯೭೫ರ ವರೆಗೆ ಅವರ ಶಾಸನಗಳು ಇಲ್ಲಿ ಕಂಡುಬರುತ್ತವೆ. ಇದಲ್ಲದೆ, ಚೋಳರಾಜರಿಗೆ ಸೇರಿದ ಎರಡು ತಮಿಳು ಶಾಸನಗಳೂ ಕಂಡುಬರುತ್ತವೆ. ಇದರಲ್ಲಿ ಒಂದು ಕ್ರಿ.ಶ. ೧೦೪೮ರಲ್ಲಿ ಬರೆಸಿದ್ದು, ರಾಜಾಧಿರಾಜನ ಬಗ್ಗೆ ತಿಳಿಸುತ್ತದೆ. ಮತ್ತೊಂದು ಶಾಸನವು ಕ್ರಿ. ಶ. ೧೦೬೧ರದಾಗಿದ್ದು, ರಾಜೇಂದ್ರನ ಬಗ್ಗೆ ತಿಳಿಸುತ್ತದೆ. ಹಾಗೆಯೇ, ಕಲ್ಯಾಣಿ ಚಾಲುಕ್ಯರ ಕೆಲವು ಶಾಸನಗಳನ್ನೂ ಇಲ್ಲಿ ಕಾಣಬಹುದು.

ಈ ಜಿಲ್ಲೆಯು ಹೊಯ್ಸಳ ರಾಜಧಾನಿಯಿಂದ ದೂರದಲ್ಲಿದ್ದರೂ ಇವರ ಕಾಲದಲ್ಲಿ ಪ್ರಮುಖವಾದ ಸ್ಥಳವಾಗಿದ್ದಿತೆಂದರೆ ತಪ್ಪಾಗಲಾರದು. ಇಲ್ಲಿ ಸುಮಾರು ೧೧೦ಕ್ಕೂ ಹೆಚ್ಚಿನ ಹೊಯ್ಸಳ ಶಾಸನಗಳನ್ನು ಕಾಣಬಹುದು. ಇವು ಕ್ರಿ.ಶ. ೧೦೭೮ರಿಂದ ೧೩೪೨ರ ಮಧ್ಯ ಭಾಗಕ್ಕೆ ಸೇರಿದವುಗಳಾಗಿವೆ. ಈ ವಂಶದ ಎಲ್ಲಾ ರಾಜರುಗಳೂ ಸಾಮಾನ್ಯವಾಗಿ ಈ ಜಿಲ್ಲೆಯನ್ನು ತಮ್ಮ ಆಡಳಿತಕ್ಕೆ ವಶಪಡಿಸಿಕೊಂಡಿದ್ದರು. ಅತೀ ಪುರಾತನವಾದ ಹೊಯ್ಸಳರ ಶಾಸನವು ತಿಪಟೂರಿನಲ್ಲಿ ಕಂಡುಬರುತ್ತದೆ. ಅದು ವಿನಯಾದಿತ್ಯನ (ಕ್ರಿ. ಶ. ೧೦೪೭–೧೦೯೮) ಕಾಲದ್ದಾಗಿದ್ದು, ಅವನ ಮುಖ್ಯಸ್ಥಮಾಯಿಂದನ ವಂಶಾವಳಿಯ ಬಗ್ಗೆ ತಿಳಿಸುತ್ತದೆ. ಇಲ್ಲಿಯ ಎಲ್ಲ ಶಾಸನಗಳಿಂದ ನಮಗೆ ತಿಳಿದುಬರುವ ಅಂಶವೆಂದರೆ, ಹೊಯ್ಸಳ ರಾಜರು ಯಾವ ದೊಡ್ಡ ಯುದ್ಧಗಳನ್ನೂ ಈ ಜಿಲ್ಲೆಯಲ್ಲಿ ನಡೆಸಲಿಲ್ಲ. ಅವರ ಅವಧಿಯಲ್ಲಿ ಇಲ್ಲಿ ಹೆಚ್ಚು ಕಡಿಮೆ ಶಾಂತವಾದ ವಾತಾವರಣವು ಇದ್ದಿತು. ಹೊಯ್ಸಳರ ನಂತರ ಆಳ್ವಿಕೆ ನಡೆಸಿದ ವಿಜಯನಗರ ಹಾಗೂ ಮೈಸೂರು ಒಡೆಯರ ಶಾಸನಗಳೂ ಇಲ್ಲಿ ಕಂಡುಬರುತ್ತವೆ.

ತುಮಕೂರು ಜಿಲ್ಲೆಯ ಸುಮಾರು ಹನ್ನೆರಡು ಎಡೆಗಳಲ್ಲಿ ಹೊಯ್ಸಳರ ಹತ್ತೊಂಬತ್ತು ದೇವಸ್ಥಾನಗಳನ್ನು ಕಾಣಬಹುದು. ಇವು ಮುಖ್ಯವಾಗಿ ತಿಪಟೂರು, ತುರುವೇಕೆರೆ, ಕುಣಿಗಲ್ಲು ಹಾಗೂ ತುಮಕೂರು ತಾಲ್ಲೂಕುಗಳಲ್ಲಿ ಹೆಚ್ಚಾಗಿದ್ದು, ಗುಬ್ಬಿ ಹಾಗೂ ಚಿಕ್ಕನಾಯಕನಹಳ್ಳಿ ತಾಲ್ಲೂಕುಗಳಲ್ಲಿ ಒಂದೊಂದು ದೇವಸ್ಥಾನವಿದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ, ಹಾಸನ ಜಿಲ್ಲೆಗೆ ಹೊಂದಿಕೊಂಡಂತೆ ಇರುವ ತಿಪಟೂರು, ತುರುವೇಕೆರೆ ಹಾಗೂ ಕುಣಿಗಲ್ಲುಗಳಲ್ಲೇ ಬಹಳಷ್ಟು ಹೊಯ್ಸಳ ದೇವಸ್ಥಾನಗಳಿರುವುದನ್ನು ಕಾಣಬಹುದು. ಹಾಗೆಯೇ, ಮಂಡ್ಯ ಜಿಲ್ಲೆಯಲ್ಲೂ ಹಾಸನ ಜಿಲ್ಲೆಗೆ ಪಕ್ಕದಲ್ಲಿ ಬರುವ ನಾಗಮಂಗಲ ಹಾಗೂ ಕೃಷ್ಣರಾಜಪೇಟೆ ತಾಲ್ಲೂಕುಗಳಲ್ಲೂ ಹನ್ನೆರಡಕ್ಕೂ ಹೆಚ್ಚು ದೇವಸ್ಥಾನಗಳಿವೆ. ಇದರಿಂದ ಹೊಯ್ಸಳರು ದೂರದ ಪಾವಗಡ, ಮಧುಗಿರಿಗಳಿಗಿಂತ ಹಾಸನ ಜಿಲ್ಲೆಗೆ ಸೇರಿದಂತೆ ಇರುವ ಪಕ್ಕದ ತಾಲ್ಲೂಕುಗಳಲ್ಲಿ ಹೆಚ್ಚಿನ ಹೊಯ್ಸಳ ದೇವಸ್ಥಾನಗಳನ್ನು ಕಟ್ಟಿಸಿರುವುದು ವ್ಯಕ್ತಪಡುತ್ತದೆ.

ಕೈದಾಳದ ಚೆನ್ನಕೇಶವ ಹಾಗೂ ಗಂಗಾಧರೇಶ್ವರ ದೇವಸ್ಥಾನಗಳು ಹೊಯ್ಸಳ ಶೈಲಿಯಲ್ಲಿಯೇ ಪುರಾತನವಾದವುಗಳು. ಇವುಗಳು ಕಲೆ ಮತ್ತು ವಾಸ್ತುಶಿಲ್ಪಗಳ ದೃಷ್ಟಿಯಿಂದ ಮುಖ್ಯವಾದ ದೇವಸ್ಥಾನಗಳಲ್ಲದಿದ್ದರೂ ಇಲ್ಲಿಯ ಕ್ರಿ. ಶ. ೧೧೫೧ರ ಶಾಸನದಿಂದ ಇವುಗಳ ಕಾಲವನ್ನು ತಿಳಿದುಕೊಳ್ಳಬಹುದು. ನೊಣವಿನಕೆರೆಯ ವೇಣುಗೋಪಾಲ ದೇವಸ್ಥಾನವನ್ನು ಕ್ರಿ.ಶ. ೧೨೮೬ರಲ್ಲಿ ಕಟ್ಟಿದ್ದು, ಇದು ಕೊನೆಯ ದೇವಸ್ಥಾನವಾಗಿರಬಹುದು.

ಇಲ್ಲಿರುವ ದೇವಸ್ಥಾನಗಳಲ್ಲಿ ಸುಮಾರು ೯ ದೇವಸ್ಥಾನಗಳು ಶೈವಮತಕ್ಕೂ ಇತರ ೯ ದೇವಸ್ಥಾನಗಳು ವೈಷ್ಣವ ಮತಕ್ಕೂ ಸೇರಿದವುಗಳಾಗಿವೆ. ನಿಟ್ಟೂರಿನಲ್ಲಿ ಒಂದು ಜೈನ ಬಸದಿಯನ್ನು ಸಹಾ ಕಾಣಬಹುದು. ಇವುಗಳಲ್ಲಿ ತುರುವೇಕೆರೆಯ ದೇವಸ್ಥಾನಗಳೂ ಅರಳುಗುಪ್ಪೆ, ನಾಗಲಾಪುರ, ಶೆಟ್ಟಿಕೆರೆ, ವಿಷ್ಣುಸಂತೆ ಹಾಗೂ ನಿಟ್ಟೂರಿನ ದೇವಸ್ಥಾನಗಳೂ ಮುಖ್ಯವಾದುವು.

**ಮುಖ್ಯ ದೇವಸ್ಥಾನಗಳು :** ನಿಟ್ಟೂರಿನ ಶಾಂತೀಶ್ವರ ಬಸದಿಯು ಈ ಜಿಲ್ಲೆಯ ಏಕೈಕ ಜೈನ ಬಸದಿಯಾದರೂ ಇದು ಬಹಳ ಮುಖ್ಯವಾದುದು. ಇದು ಹೊಯ್ಸಳ ಶೈಲಿಯಲ್ಲಿ ಬಳಪದಕಲ್ಲಿನಲ್ಲಿ ಕಟ್ಟಲ್ಪಟ್ಟಿರುವ ದೇವಸ್ಥಾನ. ಗರ್ಭಗೃಹ, ಸುಕನಾಸಿ, ಒಂಬತ್ತು ಅಂಕಣಗಳಿಂದ ಕೂಡಿದ ಸುಂದರವಾದ ನವರಂಗ ಹಾಗೂ ಒಂದು ಸಣ್ಣ ಮುಖಮಂಟಪದಿಂದ ಕೂಡಿದೆ. ಮುಖ್ಯವಾದ ಅಂಶವೆಂದರೆ, ಇಲ್ಲಿಯ ತಿರುಗು ರಾಟೆಯಿಂದ

ಮಾಡಿರುವ ಸುಂದರ ಕಂಬಗಳು ಹಾಗೂ ಒಂಬತ್ತು ಬೇರೆ ಬೇರೆ ವಿಧಾನಗಳಿಂದ ಮಾಡಿರುವ ಅಂಕಣಗಳು ಗಮನಾರ್ಹವಾದುವು. ಗರ್ಭಗೃಹದಲ್ಲಿ ಕಂಡುಬರುವ ಶಾಂತಿನಾಥ ಪ್ರತಿಮೆಯು ಸುಂದರವಾಗಿದ್ದು, ಹೊಯ್ಸಳ ಶೈಲಿಯ ಕೃತಿಯಾಗಿದೆ ; ನಗುಮುಖದಿಂದ ಕೂಡಿದೆ. ಇದನ್ನು ಸಮಪ್ರಮಾಣದಲ್ಲಿ ಕೆತ್ತಿ ಹೊಳಪನ್ನು ಕೊಡಲಾಗಿದೆ. ಇಲ್ಲಿ ಕಂಡುಬರುವ ಆರು ಶಾಸನಗಳಲ್ಲಿ ಕ್ರಿ.ಶ. ೧೨೯೯ರ ಶಾಸನವು ಈ ಬಸದಿಯ ಹೊರಗೋಡೆಯನ್ನು ಕಟ್ಟಿದುದನ್ನು ತಿಳಿಸುತ್ತದೆ. ಮತ್ತೊಂದು ಶಾಸನದಲ್ಲಿ ಇದನ್ನು ಕಟ್ಟಿದ ಶಿಲ್ಪಿ ಮಲೋಜಿಯ ಮಲ್ಲಯ್ಯನ ಬಗ್ಗೆ ಉಲ್ಲೇಖನವಿದೆ. ಈತನ ಹೆಸರು ಬೇರೆಲ್ಲೂ ಕಂಡುಬರದೇ ಇರುವುದು ಒಂದು ವಿಶೇಷ.

ಅರಳುಗುಪ್ಪೆಯ ಚೆನ್ನಕೇಶವ ದೇವಾಲಯವು ಪ್ರಮುಖವಾದುದೆಂದು ಪರಿಗಣಿಸಲ್ಪಟ್ಟಿದ್ದು, ಹೊಯ್ಸಳ ಶೈಲಿಯ ಎಲ್ಲ ಮುಖ್ಯ ಗುಣಲಕ್ಷಣಗಳನ್ನೂ ಹೊಂದಿದೆ.

ತುರುವೇಕೆರೆಯ ಚೆನ್ನಿಗರಾಯ ಹಾಗೂ ಶಂಕರೇಶ್ವರ ದೇವಸ್ಥಾನಗಳು ಈ ಜಿಲ್ಲೆಯ ಹೊಯ್ಸಳ ಶೈಲಿಯ ದೇವಸ್ಥಾನಗಳೆಂದು ಹೇಳಿದರೆ ತಪ್ಪಾಗಲಾರದು. ಇವು ೩ನೇ ನರಸಿಂಹನ ಕಾಲಕ್ಕೆ ಸೇರಿದವು. ಚೆನ್ನಿಗರಾಯ ದೇವಸ್ಥಾನದ ಗರ್ಭಗುಡಿಯಲ್ಲಿ ಗರುಡಪೀಠದ ಮೇಲೆ ಸಮಭಂಗದಲ್ಲಿ ನಿಂತಿರುವ ಐದು ಅಡಿ ಎತ್ತರದ ವಿಷ್ಣುವಿನ ಮೂರ್ತಿಯು ಸುಂದರವಾಗಿ ಮೂಡಿಬಂದಿದೆ.

ಈ ಎರಡೂ ದೇವಸ್ಥಾನಗಳ ಶಿಖರಗಳು ಗಮನ ಸೆಳೆಯುತ್ತವೆ. ಶಿಖರದ ಅಮಲಶಿಲೆಯು ಕೆಳಗಿನಿಂದ ಮೇಲಿನವರೆಗೂ ವೃತ್ತಾಕಾರವಾಗಿದ್ದು, ನಾಗರ ಹಾಗೂ ವೇಸರ ಶೈಲಿಗಳ ಹೊಂದಾಣಿಕೆಯನ್ನು ಕಾಣಬಹುದು. ಇಲ್ಲಿಯ ವಿಮಾನ ಒಂದರಲ್ಲೇ ದ್ರಾವಿಡ, ನಾಗರ ಹಾಗೂ ವೇಸರ ಶೈಲಿಗಳನ್ನು ಕಾಣಬಹುದು. ಯಾವ ಭಿತ್ತಿಚಿತ್ರಗಳನ್ನು ಕಾಣದಿದ್ದರೂ ವಾಸ್ತುಶಿಲ್ಪದಲ್ಲಿ ಬೇರೆ ಯಾವ ದೇವಸ್ಥಾನಕ್ಕೂ ಕಡಿಮೆ ಇಲ್ಲದಂತೆ ಕೆತ್ತಿದ್ದು, ಇತರ ದೇವಸ್ಥಾನಗಳಿಗಿಂತ ಆಕರ್ಷಕವಾಗಿದೆ.

ಕುಣಿಗಲ್ಲಿನಲ್ಲಿ ಮೂರು ಸಣ್ಣ ಹೊಯ್ಸಳ ದೇವಸ್ಥಾನಗಳಿದ್ದು, ಇವುಗಳಲ್ಲಿ ವಿಜಯನಗರ ಕಾಲದ ವಾಸ್ತುಶಿಲ್ಪವನ್ನೂ ಕಾಣಬಹುದು. ನಾಗಲಾಪುರದ ಚೆನ್ನಕೇಶವ ದೇವಸ್ಥಾನ ಮತ್ತು ಶೆಟ್ಟಿಕೆರೆಯ ಯೋಗಮಾಧವ ದೇವಸ್ಥಾನಗಳು ಹೊಯ್ಸಳ ಶೈಲಿಯ ಎಲ್ಲ ಗುಣಲಕ್ಷಣಗಳನ್ನೂ ಹೊಂದಿವೆ. ವಿಘ್ನಸಂತೆಯ ಬಾಲಲಿಂಗೇಶ್ವರ ಹಾಗೂ ಲಕ್ಷ್ಮೀನರಸಿಂಹ ದೇವಸ್ಥಾನಗಳು ಮುಖ್ಯ ದೇವಸ್ಥಾನಗಳಾಗಿವೆ. ಲಕ್ಷ್ಮೀನರಸಿಂಹ ದೇವಸ್ಥಾನವು ತ್ರಿಕೂಟಾಚಲವಾಗಿದ್ದು, ಕಿಕ್ಕೇರಿ ಹಾಗೂ ಅರಸೀಕೆರೆ ದೇವಸ್ಥಾನಗಳ ಮಾದರಿಯಲ್ಲಿದೆ. ಇದರಲ್ಲಿ ಜಗತಿ ಕಂಡುಬರುವುದಿಲ್ಲ. ಅಧಿಷ್ಠಾನದಲ್ಲಿ ಅಡ್ಡಪಟ್ಟಿಕೆಗಳನ್ನು ಕಾಣಬಹುದು. ಇದರಲ್ಲಿ ನಕ್ಷತ್ರಾಕಾರವು ಕಂಡುಬರುವುದಿಲ್ಲ ಹಾಗೂ ಭಿತ್ತಿಯಲ್ಲಿ ಯಾವುದೇ ಮೂರ್ತಿಗಳು ಇಲ್ಲ. ಬದಲಿಗೆ ಅಲ್ಲಲ್ಲಿ ಅಲಂಕಾರ ಕಂಬಗಳನ್ನು ಕೆತ್ತಿರುವುದನ್ನು ಕಾಣಬಹುದು.

ಹೀಗೆ ಈ ಜಿಲ್ಲೆಯಲ್ಲಿ ಹೊಯ್ಸಳ ಶೈಲಿಗೆ ಸೇರಿದ ಎಲ್ಲ ರೀತಿಯ ಸುಂದರ ದೇವಸ್ಥಾನಗಳನ್ನು ಕಾಣಬಹುದು. ಇವುಗಳಲ್ಲಿ ಕಂಡುಬರುವ ಶಾಸನಗಳು ಹೊಯ್ಸಳ ಇತಿಹಾಸವನ್ನು ತಿಳಿದುಕೊಳ್ಳಲು ಬಹಳ ಸಹಾಯಕವಾಗಿವೆ. ಧಾರ್ಮಿಕ ಇತಿಹಾಸ ಹಾಗೂ ಹೊಯ್ಸಳ ಕಲೆ, ವಾಸ್ತುಶಿಲ್ಪ ಮತ್ತು ಶಿಲ್ಪಗಳ ಬಗ್ಗೆ ಮಹತ್ತರವಾದ ವಿಷಯಗಳನ್ನು ತಿಳಿದುಕೊಳ್ಳುವಲ್ಲಿ ಈ ಜಿಲ್ಲೆಯ ದೇವಸ್ಥಾನಗಳು ಮುಖ್ಯಪಾತ್ರ ವಹಿಸುತ್ತವೆ.

## ಆಧಾರ ಗ್ರಂಥಗಳು

೧. ಮಂಡ್ಯ ಜಿಲ್ಲೆಯ ಗೆಜೆಟಿಯರ್
೨. ಡಾ॥ ಬಿ. ಶೇಕ್‌ಅಲಿ (ಸಂ.): ದಿ ಹೊಯ್ಸಳ ಡೈನಾಸ್ಟಿ
೩. ಎಪಿಗ್ರಾಫಿಯ ಕರ್ನಾಟಿಕಾ, ಸಂಪುಟ ೬
೪. ಆರ್ಕ್ಯಾಲೋಜಿಕಲ್ ಸ್ಟಡೀಸ್, ಸಂಪುಟ ೩